

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 818 |
| ಸದಸ್ಯರ ಹೆಸರು | ಶ್ರೀ ಹೆಚ್. ಎಂ. ರಮೇಶ ಗೌಡ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 09.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಮರಳು ಅಭಾವ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರವು ಸಾರ್ವಜನಿಕರಿಗೆ ಅಗತ್ಯವಿರುವ ಮರಳು ಪೂರೈಕೆಗೆ ರೂಪಿಸಿರುವ ನೀತಿ ನಿಯಮಗಳೇನು; (ವಿವರ ಒದಗಿಸುವುದು) | ಬಂದಿರುತ್ತದೆ.<br>ರಾಜ್ಯದಲ್ಲಿ ಸಾರ್ವಜನಿಕರಿಗೆ ಅಗತ್ಯವಿರುವ ಮರಳನ್ನು ಪೂರೈಸಲು ಸರ್ಕಾರವು ದಿನಾಂಕ 12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ಕ್ಕೆ ತಿದ್ದುಪಡಿ ತಂದು ತಿದ್ದುಪಡಿ ನಿಯಮಗಳು, 2016 ನ್ನು ಜಾರಿಗೊಳಿಸಿದ್ದು, ಪ್ರಮುಖಾಂಶಗಳು ಕೆಳಕಂಡಂತಿವೆ;<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-T ರಂತೆ ಟೆಂಡರ್ ಕಂ–ಇ–ಹರಾಜು ಮೂಲಕ ನದಿ ಪಾತ್ರಗಳಲ್ಲಿ ಮರಳು ಬ್ಲಾಕುಗಳನ್ನು ವಿಲೇಪಡಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ, ಪ್ರಸ್ತುತ, ರಾಜ್ಯದಲ್ಲಿ 248 ಮರಳು ಬ್ಲಾಕ್ ಗಳನ್ನು ಟೆಂಡರ್–ಕಂ–ಹರಾಜು ಮೂಲಕ ಮರಳು ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ.<br>• ನಿಯಮ 31-ZA ರಂತೆ ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆಗೆ 82 ಲೈಸೆನ್ಸ್ ನೀಡಲಾಗಿರುತ್ತದೆ.<br>• ನಿಯಮ 31-ZB ರಂತೆ ಕರಾವಳಿ ನಿಯಂತ್ರಣ ವಲಯ ಪ್ರದೇಶಗಳ ನದಿ ಪಾತ್ರಗಳಲ್ಲಿ 34 ಮರಳು ದಿಬ್ಬಗಳಲ್ಲಿ ಮರಳು ತೆಗೆಯಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ರಾಜ್ಯದಲ್ಲಿ ಎಂ–ಸ್ಯಾಂಡ್ ಉತ್ಪಾದನೆಗೆ ಪ್ರೋತ್ಸಾಹ ನೀಡಲಾಗುತ್ತಿದ್ದು, ಪ್ರಸ್ತುತ 289 ಎಂ–ಸ್ಯಾಂಡ್ ಘಟಕಗಳು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಘಟಕಗಳಿಂದ ರಾಜ್ಯದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಕೆಯಾಗುತ್ತಿರುತ್ತದೆ.<br>• ನಿಯಮ 31-ZF ರಂತೆ, ವಿದೇಶದಿಂದ ಮರಳು ಆಮದು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ನದಿ ಪಾತ್ರಗಳ ಪಕ್ಕದ ಕೃಷಿ ಜಮೀನುಗಳಲ್ಲಿ ಪ್ರವಾಹದಿಂದ ಸಂಗ್ರಹವಾಗಿರುವ ಮರಳನ್ನು ತೆರವುಗೊಳಿಸಿ ಕೃಷಿ ಯೋಗ್ಯ ಭೂಮಿಯಾಗಿ ಪರಿವರ್ತಿಸಲು ಕೃಷಿ ಜಮೀನು ಮಾಲೀಕರುಗಳಿಗೆ ಸದರಿ ಮರಳನ್ನು ತೆಗೆದು ವಿಲೇಪಡಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. |

| | | |
|---|---|---|
| | | • ಮುಂದುವರೆದು, ದಿನಾಂಕ 05.05.2020 ರಂದು ಹೊಸ ಮರಳು ನೀತಿ, 2020 ನ್ನು ಜಾರಿಗೆ ತರಲಾಗಿರುತ್ತದೆ. ಸದರಿ ಮರಳು ನೀತಿಯಂತೆ, I, II & III ನೇ ಶ್ರೇಣಿಯ ಹಳ್ಳ / ತೊರೆ ಹಾಗೂ ಕೆರೆಗಳಲ್ಲಿ ಲಭ್ಯವಿರುವ ಮರಳನ್ನು ಗ್ರಾಮ ಪಂಚಾಯಿತಿಗಳಿಂದ ವಿಲೇವಾರಿ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಅದರಂತೆ ಪ್ರಸ್ತುತ 193 ಮರಳು ನಿಕ್ಷೇಪದ ಪ್ರದೇಶಗಳನ್ನು ಗುರುತಿಸಲಾಗಿದ್ದು, ಈ ಪೈಕಿ 87 ಬ್ಲಾಕುಗಳಿಗೆ ಅಧಿಸೂಚನೆ ಹೊರಡಿಸಿ ಕಾರ್ಯಾದೇಶ ನೀಡಲಾಗಿರುತ್ತದೆ.<br>• IV, V & VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಅಣೆಕಟ್ಟು / ಜಲಾಶಯ / ಬ್ಯಾರೇಜ್ ಹಾಗೂ ಅಣೆಕಟ್ಟಿನ ಹಿನ್ನೀರಿನ ಪ್ರದೇಶದಲ್ಲಿ ಲಭ್ಯವಿರುವ ಮರಳನ್ನು ತೆಗೆಯಲು ಸರ್ಕಾರಿ ಸ್ವಾಮದ ಸಂಸ್ಥೆಗಳಾದ ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಶನ್ ಲಿಮಿಟೆಡ್ (KSMCL) ಮತ್ತು ಹಟ್ಟಿ ಚಿನ್ನದ ಗಣಿ ನಿಯಮಿತ (HGML) ಇವರಿಗೆ ವಹಿಸಲಾಗಿರುತ್ತದೆ.<br>ಅದರಂತೆ, ಪ್ರಸ್ತುತ ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಶನ್ ಲಿಮಿಟೆಡ್ ರವರಿಗೆ 46 ಹಾಗೂ ಹಟ್ಟಿ ಚಿನ್ನದ ಗಣಿ ನಿಯಮಿತ ಇವರಿಗೆ 43 ಮರಳು ಬ್ಲಾಕುಗಳಲ್ಲಿ ಮರಳು ಗಣಿಗಾರಿಕೆ ನಡೆಸಲು ಆಯಾ ಜಿಲ್ಲಾ ಮರಳು ಸಮಿತಿಗಳಿಂದ ಅಧಿಸೂಚನೆ ಹೊರಡಿಸಲಾಗಿರುತ್ತದೆ. |
| ಆ. | ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾರ್ವಜನಿಕರಿಗೆ ಮರಳು ಪೂರೈಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು ಹಾಗೂ ಸರ್ಕಾರದಿಂದ ಮರಳು ಪೂರೈಸಲು ಗುರುತಿಸಿರುವ ಸ್ಥಳಗಳು ಯಾವುವು ಹಾಗೂ ಸರ್ಕಾರ ಪ್ರತಿ ಟನ್ ಮರಳಿಗೆ ನಿಗದಿಪಡಿಸಿರುವ ದರವೆಷ್ಟು; | ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿ ನೈಸರ್ಗಿಕ ಮರಳಿನ ನಿಕ್ಷೇಪಗಳು ಲಭ್ಯವಿಲ್ಲದ ಕಾರಣ ಯಾವುದೇ ಮರಳು ಪ್ರದೇಶಗಳನ್ನು ಗುರುತಿಸಿರುವುದಿಲ್ಲ ಹಾಗೂ ಮರಳಿನ ದರವನ್ನು ನಿಗದಿಪಡಿಸಿರುವುದಿಲ್ಲ.<br>ಪ್ರಸ್ತುತ, ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ನೈಸರ್ಗಿಕ ಮರಳಿನ ಬದಲಾಗಿ ಉತ್ಪಾದಿತ ಮರಳನ್ನು ಬಳಸಲಾಗುತ್ತಿದ್ದು, ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿ 95 ಎಂ-ಸ್ಯಾಂಡ್ ಘಟಕಗಳು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಘಟಕಗಳಿಂದ ಹಾಗೂ ನೆರೆಯ ಜಿಲ್ಲೆಗಳಾದ ಚಿಕ್ಕಬಳ್ಳಾಪುರ, ತುಮಕೂರು, ಕೋಲಾರ, ರಾಮನಗರ ಹಾಗೂ ಇತರೆ ಜಿಲ್ಲೆಗಳ ಎಂ-ಸ್ಯಾಂಡ್ ಘಟಕಗಳಿಂದ ಮರಳು ಪೂರೈಕೆಯಾಗುತ್ತಿರುತ್ತದೆ. |

<table>
<tr>
<td>ಇ</td>
<td>ಕಳೆದ 3 ವರ್ಷಗಳಲ್ಲಿ ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರದಲ್ಲಿ ಎಷ್ಟು ಟನ್ ಮರಳು ಪೂರೈಕೆಗೆ ಬೇಡಿಕೆ ಇತ್ತು; ಎಷ್ಟು ಟನ್ ಮಾರಾಟ ಮಾಡಲಾಗಿದೆ; ಬೇಡಿಕೆಯಂತೆ ಪೂರ್ಣವಾಗಿ ಮರಳು ಪೂರೈಸಲಾಗಿದೆಯೇ (ವಿವರ ನೀಡುವುದು)</td>
<td>
ಕಳೆದ 3 ವರ್ಷಗಳಲ್ಲಿ ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಗೆ ಅಂದಾಜು 7 ರಿಂದ 9.5 MMT ಮರಳಿನ ಬೇಡಿಕೆ ಇರುತ್ತದೆ.
ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯ ಕ್ರಷರ್ ಘಟಕಗಳಿಂದ ಕಳೆದ ಮೂರು ವರ್ಷಗಳಲ್ಲಿ ಪೂರೈಕೆಯಾದ ಎಂ-ಸ್ಯಾಂಡ್ ಪ್ರಮಾಣದ ವಿವರಗಳು ಈ ಕೆಳಕಂಡಂತಿದೆ;
<table>
<tr><th rowspan="2">ಜಿಲ್ಲೆ</th><th colspan="3">ಉತ್ಪಾದನೆ ಮಾಡಿ, ಸಾಗಾಣಿಕೆ ಮಾಡಿರುವ ಎಂ-ಸ್ಯಾಂಡ್ ಪ್ರಮಾಣ (ಮೆ.ಟನ್. ಗಳಲ್ಲಿ)</th></tr>
<tr><th>2018-19</th><th>2019-20</th><th>2020-21 (ಇಲ್ಲಿಯವರೆಗೆ)</th></tr>
<tr><td>ಬೆಂಗಳೂರು ಗ್ರಾಮಾಂತರ</td><td>2,40,577</td><td>13,23,653</td><td>13,07,277</td></tr>
<tr><td>ಬೆಂಗಳೂರು ನಗರ</td><td>19,09,836</td><td>36,64,586</td><td>23,99,411</td></tr>
<tr><td>ಒಟ್ಟು</td><td>21,50,413</td><td>49,88,239</td><td>37,06,688</td></tr>
</table>
ಅಲ್ಲದೆ ಬೆಂಗಳೂರು ನಗರಕ್ಕೆ ನೆರೆಯ ಜಿಲ್ಲೆಗಳಾದ ಚಿಕ್ಕಬಳ್ಳಾಪುರ, ತುಮಕೂರು, ಕೋಲಾರ, ರಾಮನಗರ ಹಾಗೂ ಇತರೆ ಜಿಲ್ಲೆಗಳ ಎಂ-ಸ್ಯಾಂಡ್ ಘಟಕಗಳಿಂದ ಮರಳು ಪೂರೈಕೆಯಾಗುತ್ತಿರುತ್ತದೆ.
ಮುಂದುವರೆದು, ತಮಿಳುನಾಡು ರಾಜ್ಯದಿಂದಲೂ ಸಹ ಸಾಕಷ್ಟು ಪ್ರಮಾಣದ ಎಂ-ಸ್ಯಾಂಡ್ ಬೆಂಗಳೂರು ನಗರಕ್ಕೆ ಪೂರೈಕೆ ಆಗುತ್ತಿರುವುದರಿಂದ ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಗಳಿಗೆ ಬೇಡಿಕೆಗೆ ತಕ್ಕಂತೆ ಮರಳು ಪೂರೈಕೆಯಾಗುತ್ತಿರುತ್ತದೆ.
</td>
</tr>
</table>

ಸಂಖ್ಯೆ ಸಿಐ 119 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.